# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 867
**ಮಾನ್ಯ ಸದಸ್ಯರ ಹೆಸರು** : ಡಾ: ತೇಜಸ್ವಿನಿ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : 20-12-2021
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕನ್ನಡ ನಾಡಿನ ವೀರ ಚರಿತ್ರೆಯಲ್ಲಿ ಸೇರಿರುವ ಕೆಳದಿ ಸಾಮ್ರಾಜ್ಯದ ಗತ-ವೈಭವದ ಭವ್ಯ ಸಾಂಸ್ಕೃತಿ ಪ್ರತೀಕವಾಗಿರುವ, ವಿನಾಶದ ಅಂಚಿನಲ್ಲಿರುವ ಬಿದನೂರು ಕೋಟೆ ಮತ್ತು ಅರಮನೆ, ತೀರ್ಥಹಳ್ಳಿಯ ಕವಲೇದುರ್ಗ ಕೋಟೆ ಮತ್ತು ಅರಮನೆಯನ್ನು ಪುನರ್ ನಿರ್ಮಾಣ ಮಾಡುವ ಯೋಚನೆ ಹಾಗೂ ಯೋಜನೆ ಸರ್ಕಾರಕ್ಕೆ ಇದೆಯೇ; | ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು, ನಗರದ ಕೋಟೆ ಹಾಗೂ ಅರಮನೆಯ ನಿವೇಶನ, ಶಿವಪ್ಪನಾಯಕ ಕೋಟೆ(ಬಿದನೂರು ಕೋಟೆ) ತೀರ್ಥಹಳ್ಳಿ ತಾಲ್ಲೂಕು, ಕವಲೇದುರ್ಗದ ಕೋಟೆ ಸ್ಮಾರಕಗಳು ರಾಷ್ಟ್ರೀಯ ಸಂರಕ್ಷಿತ ಸ್ಮಾರಕವಾಗಿದ್ದು, ಈ ಸ್ಮಾರಕಗಳು ಕೇಂದ್ರ ಸಂಸ್ಕೃತಿ ಮಂತ್ರಾಲಯದ ವ್ಯಾಪ್ತಿಯಲ್ಲಿನ ಭಾರತೀಯ ಪುರಾತತ್ವ ಸರ್ವೇಕ್ಷಣೆ ಬೆಂಗಳೂರು ವಲಯದ ಅಧೀನಕ್ಕೆ ಒಳಪಡುವುದರಿಂದ ಇವುಗಳ ಸಂರಕ್ಷಣೆಯು ಸದರಿ ಇಲಾಖೆಯ ವ್ಯಾಪ್ತಿಗೆ ಬರುತ್ತದೆ. ಈ ಸ್ಮಾರಕಗಳನ್ನು ಪುನರ್ ನಿರ್ಮಾಣ ಮಾಡಲು ಅವಕಾಶವಿರುವುದಿಲ್ಲ. ಆದರೆ, ಇವುಗಳ ಸಂರಕ್ಷಣೆ ಹಾಗೂ ಜೀರ್ಣೋದ್ಧಾರ ಕೈಗೊಳ್ಳಲು ಮಾತ್ರ ನಿಯಮಗಳಡಿ ಸಾಧ್ಯವಿದೆ. ಅದರಂತೆ ನಿಯಮಿತವಾಗಿ ಸ್ಮಾರಕಗಳ ನಿರ್ವಹಣೆಯನ್ನು ಕೈಗೊಳ್ಳುತ್ತಿರುವುದಾಗಿ ಭಾರತೀಯ ಪುರಾತತ್ವ ಸರ್ವೇಕ್ಷಣೆ ಇಲಾಖೆಯು ತಿಳಿಸಿದೆ. |
| ಆ) | ಈ ಬಗ್ಗೆ ಯಾವ ಕಾಲಮಿತಿಯಲ್ಲಿ ಹಾಗೂ ತಗಲುವ ವೆಚ್ಚದ ಅಂದಾಜಿನಲ್ಲಿ ತಯಾರಿಸಲಾಗುತ್ತದೆ; ಕೆಳದಿಯ ರಮಣೀಯವಾದ ಸಾಂಸ್ಕೃತಿ ಉತ್ಸವಗಳನ್ನು ಇಂತಹ ತಾಣಗಳಲ್ಲಿ ಮಾಡಬಹುದೆ; | ಶಿವಪ್ಪನಾಯಕ ಕೋಟೆ (ಬಿದನೂರು ಕೋಟೆ) ತೀರ್ಥಹಳ್ಳಿ ತಾಲ್ಲೂಕು, ಕವಲೇದುರ್ಗದ ಕೋಟೆ (ನಿರ್ವಹಣೆಯನ್ನು ಹೊರತುಪಡಿಸಿ), ಸ್ಮಾರಕದ ಸಂರಕ್ಷಣೆಗೆ ಭಾರತೀಯ ಪುರಾತತ್ವ ಸರ್ವೇಕ್ಷಣೆ ಇಲಾಖೆಯು ಅಂದಾಜನ್ನು ಸಿದ್ಧಪಡಿಸಿದ್ದು, ಸದರಿ ಅಂದಾಜುಗಳು ಅನುಮೋದನೆಗೊಂಡ ನಂತರ ನಿಯಮಾನುಸಾರ ಒಂದು ವರ್ಷದ ಕಾಲಮಿತಿಯೊಳಗೆ ಕಾಮಗಾರಿಯನ್ನು ಕೈಗೊಂಡು ಪೂರ್ಣಗೊಳಿಸುವುದಾಗಿ ಪುರಾತತ್ವ ಅಧೀಕ್ಷಕರು, ಭಾರತೀಯ ಪುರಾತತ್ವ ಸರ್ವೇಕ್ಷಣೆ, ಬೆಂಗಳೂರು ವಲಯ ಇವರು ತಿಳಿಸಿರುತ್ತಾರೆ. |
| ಇ) | ಯಾವ ಕಾಲಮಿತಿಯೊಳಗೆ ಈ ಯೋಜನೆಯನ್ನು ಪ್ರಾರಂಭಿಸಲಾಗುವುದು ಹಾಗೂ ಪೂರ್ಣಗೊಳಿಸಿ ನಾಡಿಗೆ ಸಮರ್ಪಿಸಲಾಗುವುದು ಯಾವಾಗ? | ಸದರಿ ಇಲಾಖೆಯ Ancient Monuments and Archaeological Sites and Remains Act 1958 ರ ನಿಬಂಧನೆಗಳನ್ವಯ ಮನ್ನಣೆ ಪಡೆದ ಧಾರ್ಮಿಕ ಆಚರಣೆ ಅಥವಾ ರೂಢಿಯ ಅನುಸರಣೆಯಲ್ಲಿ ನಡೆಸಲಾಗುವಂತಹ ಕೈಂಕರ್ಯವನ್ನು ಹೊರತುಪಡಿಸಿ, ಅನುಮತಿಯನ್ನು ಪಡೆಯದೇ ಯಾವುದೇ ಸಭೆ, ಸತ್ಕಾರ, ಸಂತೋಷ ಕೂಟ, ಸಮ್ಮೇಳನ ಅಥವಾ ಮನರಂಜನೆಗಳನ್ನು ಸಂರಕ್ಷಿತ ಸ್ಮಾರಕಗಳಲ್ಲಿ ನಡೆಸಲು ಅವಕಾಶವಿರುವುದಿಲ್ಲ. |

ಸಂಖ್ಯೆ: **TOR 318 TDV 2021**

**(ಆನಂದ್ ಸಿಂಗ್)**
ಪ್ರವಾಸೋದ್ಯಮ ಹಾಗೂ
ಪರಿಸರ ಮತ್ತು ಜೀವಿ ಶಾಸ್ತ್ರ ಸಚಿವರು